


**NOTE:**
THE LOCATION OF THE HOARDING SHALL NOT BE WITHIN 30.m FROM THE END OF JUNCTIN AS SHOWN IN THE SKETCH

| | | | |
|---|---|---|---|
| LOCATION OF HOARDING NEAR JUNCTION-2 | DATE : 07-07-2004<br>SCALE: N.T.S. |  BANGALORE MAHANAGARA PALIKE | PLATE NO.<br>5 |

**ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು**
**ಭೂಸ್ವಾಧೀನ ಕಾಯ್ದೆ ಕಲಂ. 4(1)ರ ಅನ್ವಯ ಅಧಿಸೂಚನೆ**
**ಕ್ರಮಾಂಕ: ಕಗೃಮಂ. ಭೂಸ್ವಾವಿ 265/2005-06, ದಿನಾಂಕ: 21ನೇ ಜನವರಿ 2006**

ಈ ಅಧಿಸೂಚನೆಯಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ, ಕರ್ನಾಟಕ ಗೃಹ ಮಂಡಳಿಯ ವಸತಿ ಯೋಜನೆಗೆ ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರಿಗೆ ಕಂಡು ಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2)ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991ನೇ ಇಸವಿ ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ರವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲಿ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಯಾ ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರ ಮಂಜೂರಾತಿಯನ್ನು ಪಡೆಯದೆಯೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಬಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ಬೆಂಗಳೂರು ನಗರ **ತಾಲ್ಲೂಕು:** ಬೆಂಗಳೂರು ಉತ್ತರ **ಹೋಬಳಿ:** ಯಲಹಂಕ **ಗ್ರಾಮ:** ಅಳ್ಳಾಳಸಂದ್ರ

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂಬರ್ | ತರಹೆ | ಚೆಕ್ಕುಬಂದಿ | | | | ಬೇಕಾದ ಜಮೀನಿನ ವಿಸ್ತೀರ್ಣ ಎ.ಗುಂ. | ಆಕಾರ ರೂ.ಪೈ. |
|---|---|---|---|---|---|---|---|---|---|---|
| | | | | | ಪೂರ್ವ ಸ. ನಂ. | ಪಶ್ಚಿಮ ಸ. ನಂ. | ಉತ್ತರ ಸ. ನಂ. | ದಕ್ಷಿಣ ಸ. ನಂ. | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಎಂ. ಸರೋಜಮ್ಮ ಕೋಂ ಎಂ. ಮುನಿರಂಗಪ್ಪ | ಎಂ. ಸರೋಜಮ್ಮ | 33 ಪೈ | ಖುಷ್ಕಿ | ರಸ್ತೆ | ಸುಬ್ಬಯ್ಯನವರ ಜಮೀನು | ಮುನಿಯಪ್ಪನವರ ಜಮೀನು | ವೈ.ವಿ. ರಾಮಯ್ಯ ನವರ ಜಮೀನು | 1-05 1/2 | 2-16 |
| 2 | ಬಿ.ಪಿ. ಸುರೇಂದ್ರ ಬಿನ್ ಪುಟ್ಟಾಚಾರ್<br>ಎ. ಜಯ ಕೋಂ ಎಂ. ಆರ್ಮುಗಂ,<br>ಎಂ.ಮಣಿ ಬಿನ್ ಮಾಣಿಕ್ಯಾಚಾರಿ,<br>ಪಿ.ಶಾರದಮ್ಮ ಕೋಂ ಲೇಟ್ ಸುಬ್ಬಾರೆಡ್ಡಿ | ಬಿ.ಪಿ. ಸುರೇಂದ್ರ<br>ಎ. ಜಯ,<br>ಎಂ. ಮಣಿ<br>ಪಿ. ಶಾರದಮ್ಮ | 39 | ಖುಷ್ಕಿ | 38 ಸರ್ಕಾರಿ ಜಮೀನು | ಬಿ.ಬಿ. ರಸ್ತೆ, | 40,43 | 36 | 3-00<br>0-01 ಖ | 5-37 |

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

ಪಿ.ಡಿ. 33

## ಶಿಕ್ಷಣ ಇಲಾಖೆ

**ಅಧಿಸೂಚನೆ ಕ್ರಮಾಂಕ:ಇಡಿ 166 ಡಿಜಿಒ 2004, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2006**

ಸರ್ಕಾರವು ದಿನಾಂಕ 30.09.2004 ರಲ್ಲಿದ್ದಂತೆ ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಮುಖ್ಯ ಗ್ರಂಥಾಲಯಾಧಿಕಾರಿಗಳ ಜೇಷ್ಟತಾಪಟ್ಟಿ ತಯಾರಿಸಲು ಉದ್ದೇಶಿಸಿ, ಇದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಈ ಆದೇಶಕ್ಕೆ ಅನುಬಂಧಿಸಿದೆ. ಈ ಜೇಷ್ಟತಾಪಟ್ಟಿ ತಯಾರಿಕೆಗೆ ಸಂಬಂಧಿಸಿದಂತೆ ಅಕ್ಷೇಪಣೆಗಳೇನಾದರೂ ಇದ್ದಲ್ಲಿ, ಅವುಗಳ ಒಂದು ಪ್ರತಿಯನ್ನು ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಅವರಿಗೂ ಮತ್ತೊಂದು ಪ್ರತಿಯನ್ನು ಸರ್ಕಾರದ ಕಾರ್ಯದರ್ಶಿ, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಅವರಿಗೆ ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗಾಗಿ ಸಲ್ಲಿಸುವಂತೆ ಸೂಚಿಸಿದೆ. ತದನಂತರ ಬಂದ:ಬರುವ ಆಕ್ಷೇಪಣೆಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು ಎಂಬುದನ್ನು ಎಲ್ಲರೂ  ಗಮನಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತ ಎಂ.ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2)

**ಅನುಬಂಧ**

**ದಿನಾಂಕ:30.9.2004ರ ರಲ್ಲಿದ್ದಂತೆ ಮುಖ್ಯ ಗ್ರಂಥಾಲಯಾಧಿಕಾರಿಗಳ ಹುದ್ದೆಯ ಜೇಷ್ಠತಾ ಪಟ್ಟಿ**

| ಹೆಸರು | ನೇರ ನೇಮಕಾತಿ ಮುಂಬಡ್ತಿ ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| **ಶ್ರೀ : ಶ್ರೀಮತಿ** | | | | | | | |
| 1. ವಿ.ಸಿ.ಪುರಾಣಿಕ್‌ಮಠ | ನೇರನೇಮಕಾತಿ | ಸಾಮಾನ್ಯ | 20.12.1946 | 20.9.1976 | ನೇರ ನೇಮಕಾತಿ | 20.09.1976 | ದಿನಾಂಕ 31.12.2004 ರಂದು ನಿವೃತ್ತಿ ಹೊಂದಿರುತ್ತಾರೆ. |
| 2. ಪಿ.ವೈ.ರಾಜೇಂದ್ರಕುಮಾರ್ | ನೇರನೇಮಕಾತಿ | ಸಾಮಾನ್ಯ | 10.03.1950 | 01.09.1976 | ನೇರ ನೇಮಕಾತಿ | 01.09.1976 | ದಿ:22.12.2004 ರಂದು ನಿರ್ದೇಶಕರ ಹುದ್ದೆಗೆ ಬಡ್ತಿ ಹೊಂದಿರುತ್ತಾರೆ. |
| 3. ಆರ್.ಕೆ.ಹಾದಿಮನಿ | ನೇರನೇಮಕಾತಿ | ಸಾಮಾನ್ಯ | 01.02.1947 | 09.09.1971 | ನೇರ ನೇಮಕಾತಿ | 27.09.1976 | ದಿ:31.1.2005 ರಂದು ನಿವೃತ್ತಿ ಹೊಂದಿರುತ್ತಾರೆ. |
| 4. ಬಿ.ಎಸ್.ವಿಭೂತಿ | ನೇರನೇಮಕಾತಿ | ಸಾಮಾನ್ಯ | 12.05.1949 | 06.09.1976 | ನೇರ ನೇಮಕಾತಿ | 06.09.1976 | - |
| 5. ಆರ್.ವಿ.ಮಾರನಬಸರಿ | ನೇರನೇಮಕಾತಿ | ಸಾಮಾನ್ಯ | 28.10.1947 | 26.11.1975 | ನೇರ ನೇಮಕಾತಿ | 15.10.1980 | ದಿ:31.10.2005 ರಂದು ನಿವೃತ್ತಿ ಹೊಂದಿರುತ್ತಾರೆ. |
| 6. ಆರ್.ಎಫ್.ದೇಸಾಯಿ | ನೇರನೇಮಕಾತಿ | ಸಾಮಾನ್ಯ | 01.05.1949 | 16.07.1979 | ನೇರ ನೇಮಕಾತಿ | 16.07.1979 | - |
| 7. ಸಿ.ಎಂ.ಶಂಭು | ನೇರನೇಮಕಾತಿ | ಸಾಮಾನ್ಯ | 12.06.1948 | 14.11.1975 | ನೇರ ನೇಮಕಾತಿ | 28.07.1979 | - |
| 8. ಆರ್.ಎಸ್.ಅವಕ್ಕನವರ | ನೇರನೇಮಕಾತಿ | ಸಾಮಾನ್ಯ | 29.06.1948 | 16.07.1979 | ನೇರ ನೇಮಕಾತಿ | 16.07.1979 | - |
| 9. ಬಿ.ಎಫ್.ಕೂಬಿಹಾಳ್ | ನೇರನೇಮಕಾತಿ | ಸಾಮಾನ್ಯ | 20.05.1948 | 01.07.1976 | ನೇರ ನೇಮಕಾತಿ | 13.07.1979 | - |
| 10. ಕೆ.ಜಿ.ವೆಂಕಟೇಶ್ | ನೇರನೇಮಕಾತಿ | ಸಾಮಾನ್ಯ | 05.08.1952 | 12.07.1979 | ನೇರ ನೇಮಕಾತಿ | 12.07.1979 | - |

| ಹೆಸರು | ನೇರ ನೇಮಕಾತಿ ಮುಂಬಡ್ತಿ ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 11. ಎಸ್.ಬಿ.ಹೊಂಡದಕೇರಿ | ನೇರನೇಮಕಾತಿ | ಪ.ಪಂಗಡ | 04.04.1951 | 19.07.1979 | ನೇರ ನೇಮಕಾತಿ | 19.07.1979 | - |
| 12. ಎಸ್.ಎಫ್.ನಾಗೇಶ್ | ನೇರನೇಮಕಾತಿ | ಪ.ಜಾತಿ | 20.01.1951 | 09.06.1976 | ನೇರ ನೇಮಕಾತಿ | 16.03.1984 | - |
| 13. ಎ.ಬಿ.ನಾಯಕ್ | ನೇರನೇಮಕಾತಿ | ಪ.ಪಂಗಡ | 27.04.1950 | 23.05.1983 | ನೇರ ನೇಮಕಾತಿ | 16.05.1983 | - |
| 14. ಆರ್.ಕೆ.ಬಡಿಗಣ್ಣವರ | ನೇರನೇಮಕಾತಿ | ಸಾಮಾನ್ಯ | 06.10.1952 | 27.07.1979 | ನೇರ ನೇಮಕಾತಿ | 12.11.1986 | - |
| 15. ಎಫ್.ಎಸ್.ದುರ್ಗಣ್ಣವರ | ಮುಂಬಡ್ತಿ | ಸಾಮಾನ್ಯ 2ಎ ಕುರುಬ | 04.05.1947 | 01.09.1971 | 22.6.94 | 22.06.1994 | ದಿ:31.5.2005 ರಂದು ನಿವೃತ್ತಿ ಹೊಂದಿರುತ್ತಾರೆ. |
| 16. ವೈ.ಎಸ್.ಭಜಮ್ಮನವರ | ಮುಂಬಡ್ತಿ | ಸಾಮಾನ್ಯ | 04.04.1948 | 13.11.1975 | 22.6.94 | 22.06.1994 | - |
| 17. ಆರ್.ಚಂದ್ರಪ್ಪ | ಮುಂಬಡ್ತಿ | ಪ.ಜಾತಿ ಜಮ್ಮೂರ (ಆ.ಕರ್ನಾಟಕ) | 06.02.1950 | 14.10.1981 | 30.6.94 | 30.06.1994 | - |
| 18. ಬಿ.ಎಸ್.ಕರೂದಿ | ಮುಂಬಡ್ತಿ | ಸಾಮಾನ್ಯ | 05.01.1948 | 13.11.1975 | 04.4.97 | 04.04.1997 | - |
| 19. ಬಿ.ಎಸ್.ಧವನ್ | ಮುಂಬಡ್ತಿ | ಸಾಮಾನ್ಯ | 16.03.1954 | 18.07.1979 | 09.4.97 | 09.04.1997 | - |
| 20. ಎಂ.ಎಂ.ಬಡ್ನಿ | ಮುಂಬಡ್ತಿ | ಸಾಮಾನ್ಯ | 01.06.1954 | 17.07.1979 | 04.4.97 | 04.04.1997 | - |
| 21. ಎಸ್.ಟಿ.ಇಂಗಳೆ | ಮುಂಬಡ್ತಿ | ಸಾಮಾನ್ಯ 2ಎ | 26.05.1952 | 19.07.1979 | 10.4.97 | 10.04.1997 | - |
| 22. ಎಸ್.ಜಿ.ಉಮದಿ | ಮುಂಬಡ್ತಿ | ಸಾಮಾನ್ಯ | 18.08.1951 | 18.07.1979 | 13.7. 2000 | 13.07.2000 | - |
| 23. ಶ್ರೀ.ಸತೀಶ್ ಕುಮಾರ್ ಹೊಸಮನಿ | ನೇರನೇಮಕಾತಿ | ಪ.ಜಾತಿ | 1.6.1969 | 6.9.2004 | ನೇರ ನೇಮಕಾತಿ | 26.08.2004 ಆಯ್ಕೆ ಪಟ್ಟಿ ಪ್ರಕಟಿತ ದಿನಾಂಕ | ಜೇಷ್ಠತೆ ಆಯ್ಕೆ ಪಟ್ಟಿಯಂತೆ |
| 24. ಶ್ರೀಮತಿ ಎಸ್. ಸರಸ್ವತಿ | ನೇರನೇಮಕಾತಿ | ಪ.ಜಾತಿ | 28.03.1966 | 2.9.2004 | ನೇರ ನೇಮಕಾತಿ | 26.08.2004 ಆಯ್ಕೆ ಪಟ್ಟಿ ಪ್ರಕಟಿತ ದಿನಾಂಕ | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 582

**ಸ್ವರ್ಣಲತ ಎಂ.ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2)

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಬಿಜಾಪುರ

**ಪ್ರಕಟಣೆ ಸಂಖ್ಯೆ: ಜಿ ಸಕ:ಲೆಕ್ಕ:ಕಾಪಆ:ಸಿಆರ್ :2005-06, ದಿನಾಂಕ: 7ನೇ ಮಾರ್ಚ್ 2006**

ಸಮಾಜ ಕಲ್ಯಾಣ ಇಲಾಖೆಯಿಂದಾ ಸನ್ 2005-06ನೇ ಸಾಲಿಗಾಗಿ ಪರಿಶಿಷ್ಟ ಜಾತಿ ಕಾನೂನು ಪದವೀದರರಿಗೆ ಆಡಳಿತ ನ್ಯಾಯಾಧೀಕರ ತರಬೇತಿ ನೀಡಲು ಅರ್ಹ ಅಭ್ಯರ್ಥಿಗಳಿಂದಾ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಬಿಜಾಪೂರ ಜಿಲ್ಲೆಯಲ್ಲಿ ವಾಸವಾಗಿರುವ ಪರಿಶಿಷ್ಟ ಜಾತಿ ಕಾನೂನು ಪದವೀಧರರು ಈ ಕೆಳಕಂಡ ಅರ್ಹತೆ ಮತ್ತು ದಾಖಲೆಗಳನ್ನು ಹೊಂದಿದವರು ದಿನಾಂಕ: 6.4.2006 ರೊಳಗಾಗಿ ಅರ್ಜಿ ಸಲ್ಲಿಸಲು ತಿಳಿಸಲಾಗಿದೆ.

(1) ಈ ಯೋಜನೆಯಡಿ ಅರ್ಜಿದಾರರು ಪರಿಶಿಷ್ಟ ಜಾತಿಗೆ ಸೇರಿದವರಾಗಿರಬೇಕು. (ದೃಢೀಕೃತ ಜಾತಿ ಪ್ರಮಾಣ ಪತ್ರ ಲಗತ್ತಿಸಬೇಕು) ಹಾಗೂ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ ಎರಡು ವರ್ಷದಿಂದಾ ಈಚೆಗೆ ಕಾನೂನು ಪದವಿಯಲ್ಲಿ ಉತ್ತೀರ್ಣರಾಗಿರಬೇಕು. ಅಂದರೆ ದಿನಾಂಕ: 7.4.2004 ರಿಂದಾ 6.4.2006 ರಲ್ಲಿ ಅಂತಿಮ ಕಾನೂನು ಪದವಿ ಪಾಸು ಮಾಡಿರಬೇಕು.

(2) ವಕೀಲ ವೃತ್ತಿಯನ್ನು ನಡೆಸಲು ಅರ್ಹತೆ ಪಡೆದಿರುವ ಕಾನೂನು ಪದವೀಧರರು ಮಾತ್ರ ಅರ್ಜಿಸಲ್ಲಿಸತಕ್ಕದ್ದು.

(3) ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದಂದು ಅಭ್ಯರ್ಥಿಗಳ ವಯಸ್ಸು 18 ರಿಂದ 35 ವರ್ಷ ಇರಬೇಕು.

(4) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳು ತರಬೇತಿ ಅವಧಿಯ ಮಧ್ಯದಲ್ಲಿ ಬಿಟ್ಟು ಹೋಗಬಾರದು. ಒಂದು ವೇಳೆ ಬಿಟ್ಟು ಹೋದಲ್ಲಿ ಶಿಷ್ಯವೇತನದ ಮೊತ್ತವನ್ನು ಕಂದಾಯ ಬಾಕಿ ಅಂತಾ ವಸೂಲಿ ಮಾಡಲಾಗುವುದು.

(5) ತರಬೇತಿಯ ಅವಧಿ ನಾಲ್ಕು (4) ವರ್ಷಗಳದ್ದು ಆಗಿದ್ದು ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಪ್ರತಿ ತಿಂಗಳು ರೂ.1000=00 ರಂತೆ ತರಬೇತಿ ಸ್ಟೈಫಂಡ್ ನೀಡಲಾಗುವುದು.

(6) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಶಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಕ್ಕೂ ವಕೀಲ ವೃತ್ತಿ ನಡೆಸಿದ ಖಾಸಗಿ ವಕೀಲರುಗಳ ಬಳಿ ತರಬೇತಿಗೆ ನಿಯೋಜಿಸಲಾಗುವುದು.

(7) ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಅರ್ಹ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಭರ್ತಿಮಾಡಿ ಆದಾಯ ಪ್ರಮಾಣ ಪತ್ರ, ಜಾತಿ ಪ್ರಮಾಣ ಪತ್ರ, ಜನ್ಮ ದಿನಾಂಕ ದಾಖಲೆಯ ಕುರಿತು ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಹಾಗೂ ಎಲ್‌ಸಿ ಬಾರ್‌ಅಸೋಶಿಯೇಶನ್ ಸದಸ್ಯತ್ವ ಪ್ರಮಾಣ ಪತ್ರ, ಅಂತಿಮ ಕಾನೂನು ಪಾಸ್ ಮಾಡಿದ ಅಂಕಪಟ್ಟಿ ಮುಂತಾದ ಶೈಕ್ಷಣಿಕ ಅರ್ಹಪಡೆದ ದೃಢೀಕರಣ ಪ್ರಮಾಣ ಪತ್ರಗಳೊಂದಿಗೆ ದಿನಾಂಕ: 6.4.2006ರ ಒಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ಬಿಜಾಪೂರ ಇವರಿಗೆ ಅರ್ಜಿಸಲ್ಲಿಸತಕ್ಕದ್ದು. ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಬಿಜಾಪೂರ ಇವರ ಅಧ್ಯಕ್ಷತೆಯಲ್ಲಿ ಸರ್ಕಾರದಿಂದಾ ರಚಿತವಾಗಿರುವ ಆಯ್ಕೆ ಸಮಿತಿಯು ಅಭ್ಯರ್ಥಿಗಳನ್ನು ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.

ಅರ್ಜಿ ನಮೂನೆ ಮತ್ತು ಇತರೆ ಹೆಚ್ಚಿನ ವಿವರಗಳಿಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಾರ್ಯಾಲಯ ಆನಂದ ಮಹಲ್, ಬಿಜಾಪೂರ ಇಲ್ಲಿ ಸಂಪರ್ಕಿಸಬಹುದಾಗಿದೆ.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ಹಾಗೂ ಸದಸ್ಯ ಕಾರ್ಯದರ್ಶಿ
ಜಿಲ್ಲಾ ಮಟ್ಟದ ಕಾನೂನು ಪದವೀಧರರ ಆಡಳಿತ ನ್ಯಾಯಾಧೀಕರ
ತರಬೇತಿ ಆಯ್ಕೆ ಸಮಿತಿ ಬಿಜಾಪೂರ ಜಿಲ್ಲೆ.

ಪಿ.ಆರ್. 596

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರರವರ ಕಛೇರಿ ನಡವಳಿಕೆಗಳು

**ಗುನ್ನೆ ನಂ.11/2005-06, ದಿನಾಂಕ: 04.10.2005, ಅಬಕಾರಿ ಉಪ ನಿರೀಕ್ಷಕರು ನಂ-2, ಜಾ&ತ ಬಿಜಾಪೂರ.**

**ಸಂಖ್ಯೆ: ಇಎಕ್ಸ್‌ಇ:ಬಿಜೆಪಿ:ಇಐಬಿ:ಡಿಟಿಸಿಆರ್:63:2005-06, ದಿನಾಂಕ: 13ನೇ ಫೆಬ್ರವರಿ 2006**

**ಉಪಸ್ಥಿತರು:** ಕೆ.ಆರ್.ಗೌಡ್ರ,
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ.

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಅಬಕಾರಿ ಉಪ ನಿರೀಕ್ಷಕರು ನಂ-2, ಜಾರಿ ಮತ್ತು ತನಿಖೆ ಕಛೇರಿ, ಬಿಜಾಪೂರ ತಾಲ್ಲೂಕು, ಬಿಜಾಪೂರ. | 1) | ಪರಶುರಾಮ ಭೀಮು ರಾಠೋಡ ಸಾ: ಮಕಣಾಪೂರ ತಾಂಡಾ ನಂ:2, (ಆರೋಪಿ) |
| | 2) | ಶ್ರೀ ಮಹಾಲಿಂಗಪ್ಪ ತಂದೆ ಹುಲಗಪ್ಪ ಬಂಡಿವಡ್ಡರ, ಸಾ: ಮಹಾಲಿಂಗಪೂರ, ತಾ: ಮುಧೋಳ, ಜಿ:ಬಾಗಲಕೋಟೆ, ವಾಹನ ಮಾಲೀಕರು.- |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 04.10.2005 ರಂದು ಸಂಜೆ 09.30 ಗಂಟೆಗೆ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ತಾಲ್ಲೂಕು ಇವರು ತಮ್ಮ ಸಿಬ್ಬಂದಿಯೊಂದಿಗೆ ಬಿಜಾಪೂರ ತಾಲ್ಲೂಕಿನ ಶಿರನಾಳ ಗ್ರಾಮದಿಂದ ಮಕಣಾಪೂರ ತಾಂಡಾ ನಂ:2ಕ್ಕೆ ಹೋಗುವ ರಸ್ತೆಯ ಮಧ್ಯದಲ್ಲಿ ರಸ್ತೆ ಕಾವಲು ಮಾಡುತ್ತಿರುವಾಗ, ಶಿರನಾಳ ಗ್ರಾಮದಿಂದ ಮಕಣಾಪೂರ ತಾಂಡಾಕ್ಕೆ ಹೋಗುವ ರಸ್ತೆಯ ಮಾರ್ಗದಲ್ಲಿ ಒಂದು ದ್ವಿಚಕ್ರ ವಾಹನ ಬರುವುದು ಕಾಣಿಸಿತು, ದ್ವಿಚಕ್ರ ವಾಹನ ಅಬಕಾರಿ ಸಿಬ್ಬಂದಿ ಹತ್ತಿರ ಬಂದಾಗ ಅದನ್ನು ತಡೆದು ನೋಡಲಾಗಿ ಅದು ಒಂದು ಕೆಂಪು ಬಣ್ಣದ ಎಂ-80 ವಾಹನ ಇರುವುದು ತಿಳಿದುಕೊಂಡು ಎಂ-80 ದ್ವಿಚಕ್ರ ವಾಹನದ ಹಿಂದಗಡೆ ಇರುವ ಹತ್ತು (10) ಲೀಟರ್ ಸಾಮರ್ಥ್ಯದ ಪ್ಲಾಸ್ಟಿಕ್ ಕ್ಯಾನ್ ಇದ್ದು, ಅದನ್ನು ನೋಲಿನ ಹಗ್ಗದಿಂದ ಕಟ್ಟಲಾಗಿತ್ತು. ಸದರಿ ಹಗ್ಗವನ್ನು ಬಿಚ್ಚಿ ಕ್ಯಾನಿನ ಮುಚ್ಚಳಿಕೆಯನ್ನು ತೆಗೆದು ನೋಡಲಾಗಿ ಅದರಲ್ಲಿ ಘಾಟವಾಸನೆಯ ಕಳ್ಳಭಟ್ಟಿ ಸಾರಾಯಿ ಇರುವುದು ಕಂಡು ಬಂದಿತು. ತದನಂತರ ಸದರಿ ಎಂ-80 ದ್ವಿಚಕ್ರ ವಾಹನ ಪರಿಶೀಲಿಸಲಾಗಿ ಅದರ ನೋಂದಣಿ ಸಂಖ್ಯೆ: ಕೆಎ-29-ಇ-2251, ಚೆಸ್ಸಿ ನಂಬರ್: ಸಿ.16.ಸಿಜಿ.078389 ಮತ್ತು ಇಂಜಿನ್ ನಂಬರ್: ಇ-16.ಸಿಜಿ 075983 ಇರುವುದು ಅಂತಾ ತಿಳಿಸಿ ಕ್ಯಾನ್‌ದಲ್ಲಿದ್ದ 10 ಲೀಟರ್ ಕಳ್ಳಭಟ್ಟಿ ಸಾರಾಯಿ ಇಂದ 180 ಎಂಎಲ್‌ನಷ್ಟು ಒಂದು ಬಾಟಲಿಯಲ್ಲಿ ರಸಾಯನ ಪರೀಕ್ಷೆಗಾಗಿ ತೆಗೆದುಕೊಂಡು ಶೀಲ ಮಾಡಿ ಪಂಚರ ಹಾಗೂ ಅಬಕಾರಿ ಉಪ ನಿರೀಕ್ಷಕರು ಇವರ ಸಹಿ ಮಾಡಿದ ಚೀಟಿಗಳನ್ನು ಅಂಟಿಸಿ ನಂತರ ಮುದ್ದೇಮಾಲನ್ನು ಹಾಗೂ ದ್ವಿಚಕ್ರ ವಾಹನವನ್ನು ಮುಂದಿನ ತನಿಖೆಗಾಗಿ ಅಬಕಾರಿ

ಉಪ ನಿರೀಕ್ಷಕರು ತಮ್ಮ ತಬಾಕ್ಕೆ ತೆಗೆದುಕೊಂಡು ಘಟನ ನಡೆದ ಸ್ಥಳದಲ್ಲಿ ಪಂಚರ ಸಮಕ್ಷಮ ಪಂಚನಾಮೆ ಕ್ರಮ ಜರುಗಿಸಿರುತ್ತಾರೆ. ನಂತರ ಗುನ್ನೆ ನಂ.11/2005-06ನ್ನು ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ಪೀರ್ಯಾಧಿಯೊಂದಿಗೆ ಆರೋಪಿಯನ್ನು ನ್ಯಾಯಾಲಯಕ್ಕೆ ಒಪ್ಪಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ತಾಲ್ಲೂಕು ಇವರು ಸಲ್ಲಿಸಿದ ವರದಿಗಳನ್ನು ಪರಿಶೀಲನೆ ಮಾಡಲಾಗಿ ರಸಾಯನಿಕ ತಜ್ಞರ ವರದಿ ಸಂಖ್ಯೆ: ಸಿಸಿಎಲ್.5881/2005, ದಿನಾಂಕ: 20.10.2005 ರಲ್ಲಿ ಜಪ್ತು ಮಾಡಿದ ಕಳ್ಳಭಟ್ಟಿ ಸಾರಾಯಿಯಲ್ಲಿ ಮದ್ಯಸಾರದ ಅಂಶ ಇದ್ದು, ಇದು **"ಮಾನವನ ಸೇವನೆಗೆ ಯೋಗ್ಯ ಇರುವುದಿಲ್ಲಾ"** ಅಂತಾ ನಮೂದಿಸಿರುತ್ತಾರೆ. ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿಜಾಪೂರ ಇವರ ವರದಿಯಲ್ಲಿ ಸದರಿ ಎಂ-80 ದ್ವಿಚಕ್ರ ವಾಹನ ನೋಂದಣಿ ಸಂಖ್ಯೆ: ಕೆಎ-29-ಇ-2251ರ ವಾಹನದ ಮಾಲೀಕರ ಹೆಸರು ಶ್ರೀ ಮಹಾಲಿಂಗಪ್ಪಾ ತಂದೆ ಹುಲಗಪ್ಪಾ ಬಂಡಿವಡ್ಡರ ಸಾ: ಮಹಾಲಿಂಗಪೂರ, ತಾ: ಮುಧೋಳ, ಜಿ: ಬಾಗಲಕೋಟೆ ಅಂತಾ ನಮೂದಿಸಿರುತ್ತಾರೆ. ಕಾರಣ ಈ ಪ್ರಾಧಿಕಾರವು ದಿನಾಂಕ: 24.12.2005 ರಂದು ಸದರಿ ಎಂ-80 ದ್ವಿಚಕ್ರ ವಾಹನ ಸಂಖ್ಯೆ: ಕೆಎ-29-ಇ-2251ದ ಮಾಲೀಕರಿಗೆ ಅಕ್ರಮವಾಗಿ ಕಳ್ಳಭಟ್ಟಿ ಸಾಗಾಣಿಕೆ ಮಾಡುವುದರಲ್ಲಿ ತೊಡಗಿರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಪ್ರಕಾರ ಕಾರಣ ಕೇಳುವ ನೋಟೀಸು ಹೊರಡಿಸಲಾಗಿರುತ್ತದೆ. ನಂತರ ಸದರಿ ನೋಟೀಸನ್ನು ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ವಿಜಾಪೂರ ಇವರು ಮಾಲೀಕರಿಗೆ ನೋಟೀಸ್ ಜಾರಿ ಮಾಡಲು ಕ್ರಮ ತೆಗೆದುಕೊಂಡಾಗ ಸದರಿ ವಾಹನ ಮಾಲೀಕರು ಮಹಾಲಿಂಗಪೂರದಲ್ಲಿ ಇರುವುದಿಲ್ಲಾ ಅಂತಾ ತಿಳಿಸಿ, ಸ್ಥಳ ಪಂಚನಾಮೆಯನ್ನು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ನಂತರ ಈ ಪ್ರಾಧಿಕಾರವು ಸದರಿ ವಾಹನದ ವಿಚಾರಣೆಯನ್ನು ನಿಗದಿಪಡಿಸಿ, ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಹಾಗೂ ಪಿರ್ಯಾಧಿದಾರರು ಹಾಗೂ ಪಂಚ ಸಾಕ್ಷಿದಾರರು ಹಾಜರಾಗಿದ್ದರಿಂದ ವಿಚಾರಣೆಯನ್ನು ಜರುಗಿಸಲಾಯಿತು.

ಪ್ರಾಶಿಕ್ಯೂಶನ್ ಪರವಾಗಿ ಒಟ್ಟು ಎರಡು (2) ಜನರ ಸಾಕ್ಷಿಗಳನ್ನು ಸಹಾಯಕ ಅಭಿಯೋಗ ನಿರ್ದೇಶಕರು ನುಡಿಸಿ ನಿಶಾನೆ-ಪಿ-1 ರಿಂದ ನಿಶಾನೆ-ಪಿ-2ನ್ನು ಗುರುತಿಸಿಕೊಂಡಿರುವರು. ವಾಹನದ ಮಾಲೀಕರು ಗೈರು ಹಾಜರು ಇರುವುದರಿಂದ ಯಾವುದೇ ಸಾಕ್ಷ್ಯಯನ್ನು ನುಡಿಸಿರುವುದಿಲ್ಲಾ.

ಪ್ರಾಶಿಕ್ಯೂಶನ್ ಪರ ಸಾಕ್ಷಿ ನುಡಿದ ಪಿರ್ಯಾಧಿದಾರರು ಪ್ರಾ.ಸಾ-1, ಇವರು ಸಾಕ್ಷಿ ನುಡಿಯುತ್ತಾ ದಿನಾಂಕ: 09.02.2005 ರಿಂದ ನಾನು ಬಿಜಾಪೂರ ತಾಲ್ಲೂಕಿನ ಜಾರಿ ಮತ್ತು ತನಿಖೆ ಕಛೇರಿಯಲ್ಲಿ ಅಬಕಾರಿ ಉಪ ನಿರೀಕ್ಷಕನಾಗಿ ಕಾರ್ಯನಿರ್ವಹಿಸುತ್ತಿದ್ದೇನೆ. ದಿನಾಂಕ: 04.10.2005 ರಂದು ಸಾಯಂಕಾಲದ ವೇಳೆಯಲ್ಲಿ ಬಿಜಾಪೂರದ ಕೆಲ ಭಾಗಗಳಲ್ಲಿ ಅನಧೀಕೃತವಾಗಿ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಣಿಕೆಯ ಸಂಬಂಧವಾಗಿ ಖಚಿತ ಭಾತ್ಮಿ ಬಂದ ಮೇರೆಗೆ ನಾನು ಇಬ್ಬರು ಪಂಚರನ್ನು ಬರ ಮಾಡಿಕೊಂಡು ಅವರಿಗೆ ವಿಷಯವನ್ನು ತಿಳಿಸಿ ಸಾಯಂಕಾಲದ ಸುಮಾರು 6.00 ಗಂಟೆಗೆ ನಾನು ನನ್ನ ಸಿಬ್ಬಂದಿಯವರೊಂದಿಗೆ ಹಾಗೂ ಪಂಚರೊಂದಿಗೆ ಕಛೇರಿಯನ್ನು ಬಿಟ್ಟು ಬಿಜಾಪೂರ ತಾಲ್ಲೂಕಿನ ಶಿರನಾಳದಿಂದ ಮಖಣಾಪೂರ ತಾಂಡಾ ನಂ:2ಕ್ಕೆ ಹೋಗುವ ರಸ್ತೆಯ ಮಧ್ಯದಲ್ಲಿ ರಸ್ತೆ ಕಾವಲು ಮಾಡುತ್ತಾ ನಿಂತವು. ಆಗ ಸಮಯ ರಾತ್ರಿ 8.30 ಗಂಟೆ ಆಗಿತ್ತು. ನಂತರ ಸುಮಾರು 9.30 ಗಂಟೆಗೆ ಶಿರನಾಳ ಗ್ರಾಮದಿಂದ ಮಖಣಾಪೂರ ತಾಂಡಾ ನಂ:2ಕ್ಕೆ ಹೋಗುವ ರಸ್ತೆಯ ಮಾರ್ಗದಲ್ಲಿ ಒಂದು ದ್ವಿಚಕ್ರ ವಾಹನ ಬರುವದನ್ನು ಕಂಡೆವು ಸದರಿ ದ್ವಿಚಕ್ರ ವಾಹನವು ನಮ್ಮ ಸಮೀಪ ಬರುತ್ತಿರುವಾಗ ತಡೆದು ನೋಡಲಾಗಿ ಅದು ಒಂದು ಕೆಂಪುಬಣ್ಣದ ಎಂ:80 ವಾಹನ ಇರುವುದು ತಿಳಿದು ಬಂದಿತು. ಸದರಿ ವಾಹನದ ಹಿಂದಗಡೆ ಒಂದು 10 ಲೀಟರ್ ಸಾಮರ್ಥ್ಯದ ಪ್ಲಾಸ್ಟೀಕ್ ಕ್ಯಾನ್ ಇದ್ದು ಅದನ್ನು ಒಂದು ನೂಲಿನ ಹಗ್ಗದಿಂದ ಕಟ್ಟಲಾಗಿತ್ತು. ವಾಹನದ ಚಾಲಕನನ್ನು ತಡೆದು ವಿಚಾರಿಸಲಾಗಿ ಮತ್ತು ಅವನ ಹೆಸರನ್ನು ಕೇಳಲಾಗಿ ಆತನು ತನ್ನ ಹೆಸರು ಪರಶುರಾಮ ಭೀಮು ರಾಠೋಡ ಸಾ: ಮಖಣಾಪೂರ ತಾಂಡಾ ನಂ.2 ಅಂತಾ ತಿಳಿಸಿದನು. ಹಿಂದಗಡೆ ಇರುವ ಕ್ಯಾನಿನ ಬಗ್ಗೆ ವಿಚಾರಿಸಲಾಗಿ ಅವನು ಯಾವುದೇ ಸಕಾರಾತ್ಮಕ ಉತ್ತರ ನೀಡಲಿಲ್ಲಾ. ಸಂಶಯ ಬಂದು ನಮ್ಮ ಸಿಬ್ಬಂದಿ ಜನರು ಸದರಿ ಕ್ಯಾನಿಗೆ ಕಟ್ಟಿದ ಹಗ್ಗವನ್ನು ಬಿಚ್ಚಿ ಕ್ಯಾನಿನ ಮುಚ್ಚಳವನ್ನು ತೆಗೆದು ನೋಡಲಾಗಿ ಅದರಿಂದ ಘಾಟ ವ ಹುಳಚು ವಾಸನೆ ಬರುತ್ತಿತ್ತು. ಅದು ಕಳ್ಳಭಟ್ಟಿ ಸರಾಯಿ ಇರುವುದು ಕಂಡು ಬಂದಿತು. ಅದನ್ನು ಸಾಗಾಣಿಕೆ ಮಾಡಲು ಯಾವುದಾದರು ರಹದಾರಿ ಪತ್ರಗಳಿವೆ ಎಂದು ವಾಹನ ಚಾಲಕನನ್ನು ವಿಚಾರಿಸಲಾಗಿ ಅವನು ಯಾವುದೇ ಕಾಗದ ಪತ್ರಗಳು ಇಲ್ಲವೆಂದು ತಿಳಿಸಿದನು. ಮತ್ತು ಅದರಲ್ಲಿ ಕಳ್ಳಭಟ್ಟಿ ಸರಾಯಿ ಇರುತ್ತದೆ ಎಂದು ಒಪ್ಪಿಕೊಂಡನು. ಸದರಿ ದ್ವಿಚಕ್ರ ವಾಹನವನ್ನು ಪರಿಶೀಲಿಸಲಾಗಿ ಅದರ ನೋಂದಣಿ ಸಂಖ್ಯೆ: ಕೆಎ-29-ಇ-2251 ಅಂತಾ ನಮೂದಿಸಲಾಗಿತ್ತು. ನಂತರ ಪಂಚರ ಸಮ್ಮುಖದಲ್ಲಿ 10 ಲೀಟರ್ ಬಿಳಿ ಪ್ಲಾಸ್ಟೀಕ್ ಕ್ಯಾನಿನಿಂದ ರಸಾಯನಿಕ ಪರೀಕ್ಷೆಗಾಗಿ 180 ಮಿಲಿಯ ಬಾಟಲಿಯಲ್ಲಿ ಕಳ್ಳಭಟ್ಟಿ ಸರಾಯಿಯನ್ನು ತೆಗೆಯಲಾಯಿತು. ಅದಕ್ಕೆ ನಮ್ಮ ಕಛೇರಿಯ ಶೀಲಿನಿಂದ ಶೀಲು ಮಾಡಿ ನಾವು ಹಾಗೂ ಪಂಚರು ಸಹಿ ಮಾಡಿದ ಚೀಟಿಗಳನ್ನು ಅಂಟಿಸಲಾಯಿತು. ಈಗ ಸದರಿ ಮಾದರಿ ಬಾಟಲಿಗಳನ್ನು ನೋಡುತ್ತಿದ್ದು ಅದನ್ನು ಮುದ್ದೇಮಾಲು-1 ಎಂದು ಗುರುತಿಸಲಾಯಿತು. ಮತ್ತು ಆ ದಿವಸ ಸದರಿ ಮಾದರಿಗಳೊಂದಿಗೆ 10 ಲೀಟರ್ ಕಳ್ಳಭಟ್ಟಿ ಸರಾಯಿಯನ್ನು ಹಾಗೂ ಎಂ:80 ವಾಹನವನ್ನು ಸಂಖ್ಯೆ: ಕೆಎ-29-ಇ-2251ನ್ನು ಸ್ಥಳದಲ್ಲಿ ಸವಿಸ್ತಾರವಾಗಿ ಪಂಚನಾಮೆಯನ್ನು ಪಂಚರ ಸಮಕ್ಷಮ ಬರೆದು ಜಪ್ತು ಮಾಡಿಕೊಳ್ಳಲಾಯಿತು. ಆರೋಪಿತನನ್ನು ಬಂಧಿಸಿ ನಮ್ಮ ತಾಬಾಕ್ಕೆ ತೆಗೆದುಕೊಳ್ಳಲಾಯಿತು. ಸದರಿ ಜಪ್ತು ಮಾಡಿದ ಎಂ:80 ಸಂಖ್ಯೆ: ಕೆಎ-29-ಇ-2251 ವಾಹನವನ್ನು ಈಗ ನೋಡುತ್ತಿದ್ದು, ಅದು ಮುದ್ದೇಮಾಲು-2 ಎಂದು ಗುರುತಿಸಲಾಯಿತು. ನಂತರ ಆರೋಪಿತನೊಂದಿಗೆ ಕಛೇರಿಗೆ ಬಂದು ಗುನ್ನೆ ನಂಬರ್:11/2005-06 ರಲ್ಲಿ ದಾಖಲಿಸಿ ಪಿರ್ಯಾಧಿಯೊಂದಿಗೆ ಆರೋಪಿತನನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿದೆನು. ಈ ದಿವಸ ಪ್ರಥಮ ವರ್ತಮಾನದ ಪ್ರತಿಯನ್ನು ನೋಡುತ್ತಿದ್ದು ಅದನ್ನು ನಿಶಾನೆ-ಪಿ-1 ಎಂದು ಅದರ ಮೇಲಿರುವ ನನ್ನ ಸಹಿಯನ್ನು ನಿಶಾನೆ-ಪಿ-1(ಎ) ಎಂದು ಗುರುತಿಸಲಾಯಿತು. ಸದರಿ ದಿನದಂದು ಮಾಡಿದ ಪಂಚನಾಮೆಯ ಪ್ರತಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ-ಪಿ-2 ಎಂದು ಅದರ ಮೇಲಿರುವ ನನ್ನ ಸಹಿಯನ್ನು ನಿಶಾನೆ-ಪಿ-2(ಎ) ಎಂದು ಗುರುತಿಸಲಾಯಿತು. ನಂತರ ನಾನೇ ತನಿಖೆಯನ್ನು ಮುಂದುವರಿಸಿ ರಸಾಯನಿಕ ಮಾದರಿಯನ್ನು ರಸಾಯನಿಕ ತಜ್ಞರಿಗೆ ನಮ್ಮ ಕಛೇರಿಯ ರಕ್ಷಕರಾದ ಶ್ರೀ ಎಸ್.ಸಿ. ರಾಯಚೂರ ರವರ ಮುಖಾಂತರ ಬೆಂಗಳೂರಿಗೆ ಕಳುಹಿಸಿ ಕೊಟ್ಟೇನು. ಸದರಿ ರಸಾಯನಿಕ ತಜ್ಞರಿಂದ ವರದಿಯನ್ನು ಪಡೆದಿದ್ದು ಸದರಿ ವರದಿಯಲ್ಲಿ ಜಪ್ತು ಮಾಡಿದ ಕಳ್ಳಭಟ್ಟಿ ಸರಾಯಿಯಲ್ಲಿ ಮದ್ಯಸಾರದ ಅಂಶವಿರುವುದು ದೃಢಪಡಿಸಿರುತ್ತಾರೆ. ಮತ್ತು ಇದು ಮಾನವ ಸೇವನೆಗೆ ಯೋಗ್ಯವಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಸದರಿ ರಸಾಯನಿಕ ತಜ್ಞರ ವರದಿಯ ಪ್ರತಿಯನ್ನು ಈ ದಿವಸ ನೋಡುತ್ತಿದ್ದು ಅದಕ್ಕೆ ನಿಶಾನೆ-ಪಿ-3 ಎಂದು ಗುರುತಿಸಲಾಯಿತು. ನಂತರ ಆರೋಪಿತನ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಕಂಡು ಬಂದಿದ್ದರಿಂದ ದೋಷಾರೋಪಣಾ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಹಾಜರು ಇಲ್ಲದ್ದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಪ್ರಾ.ಸಾ-2: ಇವರು ಪಂಚ ಸಾಕ್ಷಿಯಾಗಿ ಸಾಕ್ಷಿ ನುಡಿಯುತ್ತಾ, ದಿನಾಂಕ: 04.10.2005 ರಂದು ನನ್ನನ್ನು ಮತ್ತು ಲಕ್ಷ್ಮಣ ಕಣಬೂರ ಈತನನ್ನು ಬಿಜಾಪೂರ ಅಬಕಾರಿ ಅಧಿಕಾರಿಗಳು ಬಿಜಾಪೂರದ ಕೆಲ ಭಾಗಗಳಲ್ಲಿ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ಭಾತ್ಮಿ ಬಂದಿದೆ. ಆ

ಸಂಬಂಧವಾಗಿ ಹುಡುಕಾಡಲು ಹೋಗುವುದಿದೆ. ಒಂದು ಪಕ್ಷದಲ್ಲಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಸಿಕ್ಕಲ್ಲಿ ಪಂಚರೆಂದು ಕಾರ್ಯ ನಿರ್ವಹಿಸಲು ಕೇಳಿಕೊಂಡರು. ಅದರನ್ವಯ ಆ ದಿನ ಸಾಯಂಕಾಲ ನಮ್ಮನ್ನು ಶಿರನಾಳದಿಂದ ಮುಖಣಾಪೂರ ತಾಂಡಾ ನಂ.2ಕ್ಕೆ ಹೋಗುವ ರಸ್ತೆಯ ಮೇಲೆ, ಮಧ್ಯದಲ್ಲಿ ಕಾವಲು ಮಾಡುತ್ತಾ ನಿಂತಿದ್ದೇವು, ಆಗ ಸುಮಾರು ರಾತ್ರಿ 9.30 ಗಂಟೆಯ ವೇಳೆಯಲ್ಲಿ ಶಿರನಾಳ ಗ್ರಾಮದಿಂದ ಒಂದು ಎಂ:80 ಮೋಟಾರ ಸೈಕಲ್ ಬರುತ್ತಿತ್ತು. ಅದನ್ನು ಅಧಿಕಾರಿಗಳು ತಡೆದು ನಿಲ್ಲಿಸಲಾಗಿ ವಾಹನದ ಹಿಂದಗಡೆಗೆ ಒಂದು ಪ್ಲಾಸ್ಟೀಕ್ ಕ್ಯಾನು ಕಟ್ಟಲಾಗಿತ್ತು. ವಾಹನ ಚಾಲಕನಿಗೆ ಆತನ ಹೆಸರನ್ನು ಕೇಳಲಾಗಿ ಪರುಶುರಾಮ ಭೀಮು ರಾಠೋಡ ಸಾ: ಮಖಾಣಾಪೂರ ತಾಂಡಾ ನಂ:2 ಅಂತಾ ತಿಳಿಸಿದನು. ಹಿಂದಿನ ಕ್ಯಾನಿನಲ್ಲಿ ಏನಿದೆ ಅಂತಾ ಕೇಳಲಾಗಿ ವ್ಯವಸ್ಥಿತವಾಗಿ ಉತ್ತರ ನೀಡಲಿಲ್ಲಾ ಅಧಿಕಾರಿಗಳು ಸದರ ಕ್ಯಾನನ್ನು ತೆಗೆದು ನೋಡಲಾಗಿ ಅದರಿಂದ ಕೆಟ್ಟ ವಾಸನೆ ಬರುತ್ತಿತ್ತು. ಮತ್ತು ಅದರಲ್ಲಿ ಕಳ್ಳಭಟ್ಟಿ ಸರಾಯಿ ಇತ್ತು. ನಂತರ ಅಧಿಕಾರಿಗಳು ಮಾದರಿಗಾಗಿ ಕಳ್ಳಭಟ್ಟಿ ಸರಾಯಿಯನ್ನು 180 ಮಿಲಿಯ ಬಾಟಲಿಯಲ್ಲಿ ಕ್ಯಾನಿನಿಂದಾ ತೆಗೆದು ಬಾಟಲಿಯನ್ನು ಶೀಲು ಮಾಡಿ ನಮ್ಮ ಹಾಗೂ ಅಧಿಕಾರಿಗಳ ಸಹಿ ಮಾಡಿದ ಚೀಟಿಗಳನ್ನು ಅಂಟಿಸಿದರು. ಈಗ ಆ ಬಾಟಲಿಯನ್ನು ನೋಡುತ್ತಿದ್ದು ಅದೇ ಇದಾಗಿರುತ್ತದೆ. ಅದನ್ನು ಈಗಾಗಲೇ ಮುದ್ದೇಮಾಲು-1 ಎಂದು ಗುರುತಿಸಲಾಗಿದೆ. ನಂತರ ಅಧಿಕಾರಿಗಳು 10 ಲೀಟರ್ ಕಳ್ಳಭಟ್ಟಿ ಸರಾಯಿಯ ಕ್ಯಾನು ಮತ್ತು ಎಂ:80 ವಾಹನ ಸಂಖ್ಯೆ: ಕೆಎ-29-ಇ-2251 ನೇದ್ದನ್ನು ನಮ್ಮ ಸಮಕ್ಷಮದಲ್ಲಿ ಪಂಚನಾಮೆಯನ್ನು ಬರೆದು ಜಪ್ತು ಮಾಡಿ ತಮ್ಮ ತಾಬಾಕ್ಕೆ ತೆಗೆದುಕೊಂಡರು. ಆರೋಪಿತನನ್ನು ಕೂಡಾ ದಸ್ತಗಿರಿ ಮಾಡಿದರು. ಸದರ ದಿನದಂದು ಮಾಡಿದ ಪಂಚನಾಮೆಯ ಪ್ರತಿಯನ್ನು ಈಗ ನೋಡುತ್ತಿದ್ದು ಅದನ್ನು ಈಗಾಗಲೇ ನಿಶಾನೆ-ಪಿ-2 ಎಂದು ಗುರುತಿಸಲಾಗಿದೆ. ಮೂಲ ಪಂಚನಾಮೆಯ ಪ್ರತಿಯ ಮೇಲೆ ನಾನು ಸಹಿ ಮಾಡಿದ್ದು ಈಗ ಝುರಾಕ್ಸ ಪ್ರತಿಯಲ್ಲಿರುವ ನನ್ನ ಸಹಿಯನ್ನು ನಿಶಾನೆ-ಪಿ-2(ಬಿ) ಎಂದು ಗುರುತಿಸಲಾಯಿತು. ಸದರಿ ಜಪ್ತು ಮಾಡಿದ ಎಂ:80 ವಾಹನವನ್ನು ಈಗ ನೋಡುತ್ತಿದ್ದು ಅದೇ ಇದಾಗಿದ್ದು ಅದನ್ನು ಈಗಾಗಲೇ ಮುದ್ದೇಮಾಲು-2 ಎಂದು ಗುರುತಿಸಲಾಗಿದೆ ಅಂತಾ ಸಾಕ್ಷಿ ನುಡಿದಿರುವರು. ವಾಹನದ ಮಾಲೀಕರಾಗಲೀ ಅಥವಾ ಮಾಲೀಕರ ಪರ ವಕೀಲರಾಗಲೀ ಈ ಪ್ರಾಧಿಕಾರದ ಮುಂದೆ ಹಾಜರು ಆಗಿರುವುದಿಲ್ಲ. ಆದ್ದರಿಂದ ಪಾಟೀ ಸಾವಲು ಇಲ್ಲವೆಂದು ಪರಿಗಣಿಸಲಾಯಿತು. ಮತ್ತು ಈ ಪಂಚ ಸಾಕ್ಷಿದಾರನ ಸಾಕ್ಷಿಯು ಪಿರ್ಯಾಧಿದಾರರ ಪರ ಪುಷ್ಠಿ ನೀಡುತ್ತದೆ.

ಮಾನ್ಯ ಎ.ಡಿ.ಪಿ. ಯವರು ಪ್ರಾಶ್ಯೂಕೇಶನ ಪರ ಸಾಕ್ಷಿಗಳು ಮುಕ್ತಾಯಗೊಳಿಸಲಾಯಿತು ಎಂದು ತಿಳಿಸಿದರು. ಪ್ರಕರಣವನ್ನು ವಾದ ವಿವಾದಕ್ಕೆ ಮಂಡಿಸಲಾಯಿತು. ಎ.ಡಿ.ಪಿ. ಯವರು ತಮ್ಮ ವಾದವನ್ನು ಮಂಡಿಸಿದರು. ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಹಾಜರು ಇಲ್ಲದರಿಂದ ಯಾವುದೇ ಪ್ರತಿವಾದಗಳಾಗಲೀ ಅಥವಾ ಸಾಕ್ಷ್ಯಾಧಾರಗಳಾಗಲೀ ಇಲ್ಲವೆಂದು ಪರಿಗಣಿಸಲಾಯಿತು.

**ಮೊದಲನೆಯ ವಿವಾದಾಂಶ:**

ದಿನಾಂಕ: 04.10.2005 ರಂದು ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿದೆಯೇ? ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32,34 ರೀತ್ಯಾ ಅಪರಾಧವಾಗಿದೆಯೇ? ಅಥವಾ ಇಲ್ಲಾ?

**ಎರಡನೆಯ ವಿವಾದಾಂಶ:**

ಸದರಿ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಯಾಗಿರುವ ಬಗ್ಗೆ ತನ್ನ ತಿಳುವಳಿಕೆಗೆ ಬಾರದೇ ಅಥವಾ ತಾನು ಶಾಮೀಲಾಗದೇ ನಡೆದಿದೆ ಎಂಬುದರ ಬಗ್ಗೆ ಅರ್ಜಿದಾರನಾಗಲೀ ಅಥವಾ ವಾಹನ ಚಾಲಕರಾಗಲೀ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲಾ?

**ಮೂರನೇಯ ವಿವಾದಾಂಶ:**

ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಿಕ್ಕೆ ಯೋಗ್ಯವಾಗಿದೆಯೇ? ಅಥವಾ ಇಲ್ಲಾ?

**ಮೊದಲನೆಯ ವಿವಾದಾಂಶಕ್ಕೆ ಉತ್ತರ-ಸಕಾರಾತ್ಮಕ (ಹೌದು):**

ಪ್ರಾಶ್ಯೂಕೇಶನ ಸಾಕ್ಷಿ ನುಡಿದ ಪಿರ್ಯಾಧಿದಾರರು ನೀಡಿರುವ ಹೇಳಿಕೆಯನ್ನು ಗಮನಿಸಿದಾಗ ಮಹಜರದಲ್ಲಿ ಇರುವ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸುತ್ತಾರೆ. ಪಂಚರ ಸಾಕ್ಷಿಯು ಕೂಡಾ ಪಿರ್ಯಾಧಿಯ ಸಾಕ್ಷಿಗೆ ಪೂರಕವಾಗಿದೆ. ಪ್ರಕರಣದಲ್ಲಿ ಆರೋಪಿಸಿರುವ ಅಂಶವಾದ ಸದರಿ ವಾಹನದಲ್ಲಿ ಸಾಗಾಣಿಕೆ ಮಾಡಲ್ಪಟ್ಟಿದ್ದು ಕಳ್ಳಭಟ್ಟಿ ಸಾರಾಯಿ ಎಂಬುದು ರಸಾಯನಿಕ ವಿಶ್ಲೇಷಣೆಯ ವರದಿಯಿಂದ ದೃಢಪಟ್ಟಿರುತ್ತದೆ. ಸದರಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳು ವಾಹನದಲ್ಲಿ ಇಲ್ಲದಿರುವ ಅಂಶವನ್ನು ಗಮನಿಸಿದಾಗ ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದೆ. ಸದರಿ ವಾಹನದಲ್ಲಿ ಕಳ್ಳಭಟ್ಟಿ ಸಾರಾಯಿ ಸಾಗಿಸಿದ ಬಗ್ಗೆ ಎದುರುದಾರರಿಂದ ಯಾವುದೇ ರೀತಿಯ ಅಭ್ಯಂತರ ವ್ಯಕ್ತವಾಗಿರುವುದಿಲ್ಲಾ.

**ಎರಡನೆಯ ವಿವಾದಾಂಶಕ್ಕೆ ಉತ್ತರ - ಇಲ್ಲಾ:**

ಮೊದಲನೆಯ ವಿವಾದಾಂಶದಿಂದ ಪಡೆದ ಉತ್ತರದಲ್ಲಿ ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದ್ದು, ಈ ಪ್ರಕರಣವು ಸಂಭವಿಸಿದ ಸಮಯದಲ್ಲಿ ಆರೋಪಿ ವಾಹನದ ಚಾಲಕನ ತಿಳುವಳಿಕೆಯಿಂದ ಹಾಗೂ ಈತನ ಶಾಮೀಲಿನಿಂದಲೇ ಸದರಿ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ರುಜುವಾತ ಆಗಿದ್ದು, ವಾಹನದ ಮಾಲೀಕನಿಂದ ಅಥವಾ ಸದರಿ ವಾಹನದ ಚಾಲಕನಿಂದಲೂ ಅವನು ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುತ್ತದೆ ಎಂಬುದು ಸಂದೇಹಾತೀತವಾಗಿ ರುಜುವಾತಾಗಿದೆ. ಇದನ್ನು ಅಲ್ಲಗಳೆಯಲು ವಾಹನ ಮಾಲೀಕನು ತನ್ನ ಪರ ಯಾವುದೇ ಸಾಕ್ಷ್ಯಾಧಾರಗಳನ್ನು ನೀಡಿರುವುದಿಲ್ಲಾ.

ನಿಯಮ 43(ಬಿ) (2) ರನ್ವಯ ಸ್ವತಃ ವಾಹನದ ಮಾಲೀಕ ಅಥವಾ ಅವರ ಪ್ರತಿನಿಧಿ ಮತ್ತು ವಾಹನ ಯಾರ ವಶದಲ್ಲಿತ್ತೋ ಆತನು ವಿವರಗಳು ವಾಹನದಲ್ಲಿ ಮದ್ಯ ಅಥವಾ ಅಮಲಿನ ಪದಾರ್ಥ ಸಾಗಾಣಿಕೆಯಾಗಿರುವುದರ ಬಗ್ಗೆ ತಮ್ಮಗಳ ಗಮನಕ್ಕೆ ಬಾರದೇ ಅಥವಾ ಶಾಮೀಲಾಗದೇ ಈ ಕೃತ್ಯವು ಸಂಭವಿಸಿದೆ. ಮತ್ತು ಇಂತಹ ಉಪಯೋಗದ ವಿರುದ್ಧ ತಾವು ಪ್ರತಿಯೊಬ್ಬರು ಎಲ್ಲ ರೀತಿಯ ಸಕಾರಣವಾದ ಮತ್ತು ಅಗತ್ಯವಾದ ಮಂಜೂರಾತಿಯನ್ನು ತೆಗೆದುಕೊಂಡಿರುವುದರ ಬಗ್ಗೆ ಅಧೀಕೃತ ಅಧಿಕಾರಿಗಳಿಗೆ ತೃಪ್ತಿಕರವಾಗಿ ಸಾಬೀತು ಪಡಿಸಬೇಕಾಗಿರುತ್ತದೆ. ಆದರೆ ವಾಹನ ಮಾಲೀಕರು ತಮ್ಮ ಹೇಳಿಕೆಯಿಂದಾಗಲೀ ಅಥವಾ ಸಾಕ್ಷ್ಯಾಧಾರಗಳಿಂದಾಗಲೀ ತಮ್ಮ ಹೊಣೆಗಾರಿಕೆಯನ್ನು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ಸಾಬೀತು ಪಡಿಸಿರುವುದಿಲ್ಲಾ.

**ಮೂರನೇ ವಿವಾದಾಂಶಕ್ಕೆ ಉತ್ತರ-(ಹೌದು):**

ಮೊದಲನೆಯ ಮತ್ತು ಎರಡನೇಯ ವಿವಾದಾಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡು ಬಂದಿರುವುದರಿಂದಾ ಈ ಕೆಳಕಂಡಂತೆ ಆದೇಶ.

**ಆದೇಶ**

ಶ್ರೀ ಕೆ.ಆರ್. ಗೌಡ್ರ, ಅಧೀಕೃತ ಅಧಿಕಾರಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ ಬಿಜಾಪೂರ ಆದ ನಾನು, ಕರ್ನಾಟಕ ಅಬಕಾರಿ ಅಧಿನಿಯಮ 1965ರ ನಿಯಮ 43(ಎ) ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ನಂತರ ನಿಯಮ 43(ಎ)2 ರನ್ವಯ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ತಾಲ್ಲೂಕು ಇವರ ಗುನ್ನೆ ನಂ:11/2005-06 ದಿನಾಂಕ: 4.10.2005 ರಲ್ಲಿ ಜಪ್ತು ಮಾಡಲ್ಪಟ್ಟ ದ್ವಿಚಕ್ರ ವಾಹನ ಎಂ:80 ನಂಬರ್ ಕೆಎ-29-ಇ-2251ನ್ನು ಹಾಗೂ 10 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಪ್ರಕರಣದಲ್ಲಿ ಜಪ್ತು ಮಾಡಿದ 10.000 ಲೀಟರ್ ಕಳ್ಳಭಟ್ಟಿ ಸಾರಾಯಿ (ರಸಾಯನಿಕ ವಿಶ್ಲೇಷಣೆಗಾಗಿ ತೆಗೆದ ಶ್ಯಾಂಪಲನ್ನು ಹೊರತುಪಡಿಸಿ) ಅಬಕಾರಿ ಉಪ ಅಧೀಕ್ಷಕರು ಬಿಜಾಪೂರ ಉಪ ವಿಭಾಗ ಇವರ ಸಮ್ಮುಖದಲ್ಲಿ ಪಂಚನಾಮ ಕ್ರಮ ಜರುಗಿಸಿ ನಾಶಪಡಿಸಲು ಆದೇಶಿಸಿದ್ದೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 13.02.2006 ರಂದು ಶೀಘ್ರಲಿಪಿಗಾರರಿಗೆ ಉಕ್ತ ಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಅಮಲಿನಲ್ಲಿ ಬರುವುದು.

**ಕೆ.ಆರ್. ಗೌಡ್ರ**
ಅಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ.
ಬಿಜಾಪೂರ ಜಿಲ್ಲೆ, ಬಿಜಾಪೂರ.

**ಅನುಬಂಧ (1)**

**ಫಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

| | | |
|---|---|---|
| ಪ್ರಾ.ಸಾ-1: | ಪರುಶುರಾಮ ಸಾಬು ಪೀಡಕರ, ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ. | ತನಿಖಾಧಿಕಾರಿಗಳು |
| ಪ್ರಾ.ಸಾ-2: | ಶಬ್ಬೀರ ಹುಸೇನ್‌ಸಾಬ್ ದರ್ಗಾ ಸಾ:ತಾಸಬಾವಡಿ ಬಿಜಾಪೂರ. | ಪಂಚರು |

**ಅನುಬಂಧ (2)**

**ಫಿರ್ಯಾಧಿದಾರರ ಪರ ಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ-ಪಿ-1: | ಪ್ರಥಮ ವರ್ತಮಾನ ವರದಿ |
| ನಿಶಾನೆ-ಪಿ-1(ಎ): | ಪ್ರಾ.ಸಾ-1 ರವರ ಸಹಿ |
| ನಿಶಾನೆ-ಪಿ-2 | ಪಂಚನಾಮ |
| ನಿಶಾನೆ-ಪಿ-2(ಎ) | ಪ್ರಾ.ಸಾ.-1 ರವರ ಸಹಿ |
| ನಿಶಾನೆ-ಪಿ-2(ಬಿ) | ಪ್ರಾ.ಸಾ.-2 ರವರ ಸಹಿ |
| ನಿಶಾನೆ-ಪಿ-3 | ರಸಾಯನಿಕ ತಜ್ಞರ ವರದಿಯ ಪ್ರತಿ |

**ಅನುಬಂಧ (3)**

**ಫೀರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

1) ಎಂ.ಓ.-1 ವಾಹನ ನಂಬರ್ ಕೆಎ-29-ಇ-2251
2) ಎಂ.ಓ.-2 ಮಾದರಿ ಕಳ್ಳಭಟ್ಟಿ ಸಾರಾಯಿಯ ಬಾಟಲಿಗಳು

**ಅನುಬಂಧ (4)**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು**

ಇಲ್ಲಾ.

**ಅನುಬಂಧ (5)**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು**

ಇಲ್ಲಾ.

**ಕೆ.ಆರ್. ಗೌಡ್ರ**
ಪಿ.ಆರ್. 580
ಅಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ.
ಬಿಜಾಪೂರ ಜಿಲ್ಲೆ, ಬಿಜಾಪೂರ.

## ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ), ಬೆಂಗಳೂರು, ಇವರ ನಡವಳಿಕೆಗಳು

**ವಿಷಯ :** ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ 2003 - ಕಲಂ 53ರ ರೀತ್ಯ ಸ್ಥಾಪಿಸಲಾಗಿದ್ದ ಸ್ಥಿರ ತನಿಖಾ ಠಾಣೆ, ಮೌಲ್ಯವರ್ಧಿತ ತೆರಿಗೆ ತನಿಖಾ ಠಾಣೆ, ಬಗದಲ್ ಕ್ರಾಸ್, ಬೀದರ್ ಜಿಲ್ಲೆ, ಪೂರ್ವ ವಲಯ, ಗುಲ್ಬರ್ಗ, ಇದನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :** ಈ ಕಛೇರಿಯ ನಡಾವಳಿ ಸಂಖ್ಯೆ: ವಾತೆಅಲಿ(ಗುಸ)/ವಾತೆಅ-1/ಸಿ.ಆರ್-46/04-05, ದಿನಾಂಕ: 28.03.2005.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖ (1)ರ ನಡಾವಳಿಗಳ ಪ್ರಕಾರ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ 2003ರ ಕಲಂ 53(1) ಪ್ರಕಾರ ಮೌಲ್ಯವರ್ಧಿತ ತೆರಿಗೆ ತನಿಖಾ ಠಾಣೆ, ಬಗದಲ್ ಕ್ರಾಸ್, ಬೀದರ್ ಜಿಲ್ಲೆ, ಇದನ್ನು ಸ್ಥಿರ ತನಿಖಾ ಠಾಣೆಯನ್ನಾಗಿ ಸ್ಥಾಪಿಸಲಾಗಿತ್ತು. ಈ ತನಿಖಾ ಠಾಣೆಯ ಕಾರ್ಯ ನಿರ್ವಹಣೆಯನ್ನು ಗಮನಿಸಿದಾಗ ಸಂಗ್ರಹಿಸಿದ ದಾಖಲಾತಿಗಳ ಸಂಖ್ಯೆ ಮತ್ತು ಸಂಗ್ರಹಿಸಲಾದ ದಂಡದ ಪ್ರಮಾಣವು ತನಿಖಾ ಠಾಣೆಯು ಸ್ಥಾಪನೆಯಾದ ಸಮಯದಿಂದಲೂ ಸಹಾ ಹೆಚ್ಚಿಗೆ ಇಲ್ಲದಿರುವುದು ಕಂಡು ಬಂದಿರುತ್ತದೆ. ಆದುದರಿಂದ, ಸದರಿ ತನಿಖಾ ಠಾಣೆಯನ್ನು ರದ್ದುಗೊಳಿಸಿ ಮೇಲಿನ ತನಿಖಾ ಠಾಣೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು ಹಾಗೂ ಸಿಬ್ಬಂದಿಗಳನ್ನು ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಗುಪ್ತವಾರ್ತೆ ಮತ್ತು ಮಧ್ಯಂತರ ಕಾಲೀನ), ಪೂರ್ವ ವಲಯ, ಗುಲ್ಬರ್ಗಾ, ಇಲ್ಲಿಗೆ ವರ್ಗಾಯಿಸಿದ ಪಕ್ಷದಲ್ಲಿ, ಗುಪ್ತವಾರ್ತೆ ಚಟುವಟಿಕೆಗಳನ್ನು ಬಲಪಡಿಸಬಹುದೆಂದು ಅಭಿಪ್ರಾಯಪಡಲಾಗಿದೆ.

ಮೇಲಿನ ಹಿನ್ನೆಲೆಯಲ್ಲಿ, ರಾಜ್ಯದ ರಾಜಸ್ವ ಸಂಗ್ರಹಣೆಯ ಹಿತದೃಷ್ಟಿಯಿಂದ, ಮೌಲ್ಯವರ್ಧಿತ ತೆರಿಗೆ ತನಿಖಾ ಠಾಣೆ, ಬಗದಲ್ ಕ್ರಾಸ್, ಬೀದರ್ ಜಿಲ್ಲೆ ಈ ಸ್ಥಳದಲ್ಲಿ ಕಾರ್ಯನಿರ್ವಹಿಸುತ್ತಿರುವ ಸ್ಥಿರ ತನಿಖಾ ಠಾಣೆಯನ್ನು ರದ್ದುಗೊಳಿಸಿ, ಜಂಟಿ ಆಯುಕ್ತರ ಕಛೇರಿ (ಗುಪ್ತವಾರ್ತೆ), ಪೂರ್ವ ವಲಯ, ಗುಲ್ಬರ್ಗ, ಈ ವಿಭಾಗದ ನಿಯಂತ್ರಣದಲ್ಲಿ ಗುಪ್ತವಾರ್ತೆ ಕಾರ್ಯನಿರ್ವಹಿಸುವ ಸಲುವಾಗಿ, ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ವಾ.ತೆ.ಅ.ಅ.(ಗು.ಸ)/ವಾತೆ.ಅ-1/ಸಿ.ಆರ್.-34/2000-01, ದಿನಾಂಕ: 17ನೇ ಫೆಬ್ರವರಿ 2006**

ಮೇಲ್ಕಂಡ ಪ್ರಸ್ತಾವನೆಗಳಿಗೆ ಅನುಗುಣವಾಗಿ, ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ 2003ರ ಪ್ರಕರಣ 53(1)ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ), ಬೆಂಗಳೂರು, ಆದ ನಾನು ಮೌಲ್ಯವರ್ಧಿತ ತೆರಿಗೆ ತನಿಖಾ ಠಾಣೆ, ಬಗದಲ್ ಕ್ರಾಸ್, ಬೀದರ್ ಜಿಲ್ಲೆ, ಪೂರ್ವ ವಲಯ, ಗುಲ್ಬರ್ಗ, ಇಲ್ಲಿನ ಸ್ಥಿರ ತನಿಖಾ ಠಾಣೆಯನ್ನು ರದ್ದುಗೊಳಿಸಿರುತ್ತೇನೆ. ಹಾಗೂ ಅಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅಧಿಕಾರಿಗಳು ಮತ್ತು ಸಿಬ್ಬಂದಿಗಳು ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಗುಪ್ತವಾರ್ತೆ ಮತ್ತು ಮಧ್ಯಂತರ ಕಾಲೀನ) ಇವರ ಕಛೇರಿ, ಪೂರ್ವ ವಲಯ, ಗುಲ್ಬರ್ಗಾ ವಿಭಾಗದಲ್ಲಿ ಜಂಟಿ ಆಯುಕ್ತರ ಅಧೀನದಲ್ಲಿ ಗುಪ್ತವಾರ್ತೆ ಕಾರ್ಯ ನಿರ್ವಹಿಸುವಂತೆ ಆದೇಶಿಸಿರುತ್ತೇನೆ. ಈ ಆದೇಶವು ತತ್‌ಕ್ಷಣದಿಂದ ಜಾರಿಗೆ ಬಂದಿರುತ್ತದೆ.

ಪಿ.ಆರ್. 585 ವಾಣಿಜ್ಯ ತೆರಿಗೆ ಆಯುಕ್ತರು, ಕರ್ನಾಟಕ, ಬೆಂಗಳೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ), ಕೇಂದ್ರ ಕಛೇರಿ, ಬೆಂಗಳೂರು, ಇವರ ನಡವಳಿಕೆಗಳು

**ವಿಷಯ :** ಸಮಾಪನೆಯಲ್ಲಿರುವ ಶ್ರೀ ಎನ್. ಗೋವಿಂದಗೌಡ ಸ್ಮಾರಕ ಕೈಗಾರಿಕಾ ಸಹಕಾರ ಸಂಘ ನಿ., ಯಲವಟ್ಟಿ, ಶಿವಮೊಗ್ಗ ತಾಲ್ಲೂಕು ಇದರ ನೋಂದಣಿ ರದ್ದತಿ ಕುರಿತು.

**ಉಲ್ಲೇಖ :**
1) ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಇವರ ಪತ್ರ ಸಂಖ್ಯೆ: ಜೆಆರ್‌ಬಿ/ಎಲ್‌ಕ್ಯೂಡಿ/31/ ಎಲ್‌ಎಂಸಿ/04-05, ದಿನಾಂಕ: 07.01.2005.
2) ಈ ಕಛೇರಿಯ ಇದೇ ಕ್ರಮಾಂಕದ ನೋಟೀಸ್ ದಿನಾಂಕ: 11.03.2005 ಹಾಗೂ ಸಮಾಪನಾದೇಶದ ದಿನಾಂಕ: 16.05.2005.
3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರ ಪತ್ರ ಸಂಖ್ಯೆ: ಸನಿಶಿ24/ ಎಲ್‌ಕ್ಯೂಡಿ/04-05/1923, ದಿನಾಂಕ: 23.03.2005.
4) ಸಮಾಪನಾಧಿಕಾರಿಗಳು ಇವರ ಪತ್ರ ಸಂಖ್ಯೆ: ಸನಿ24/ಮಾಅ-1:ಸಮಾಪನೆ:376:05-06, ದಿನಾಂಕ: 30.05.2005.
5) ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಜೆಆರ್‌ಬಿ/ಎಲ್‌ಕ್ಯೂಡಿ/31/ಎಲ್‌ಎಂಸಿ/ 04-05, ದಿನಾಂಕ: 31.01.2006.

**ಪ್ರಸ್ತಾವನೆ:**

ಶ್ರೀ ಎನ್. ಗೋವಿಂದೇಗೌಡ ಸ್ಮಾರಕ ಕೈಗಾರಿಕಾ ಸಹಕಾರ ಸಂಘ ನಿ., ಶಿವಮೊಗ್ಗ ಸಂಘವು ಸಂಖ್ಯೆ: ಕೈಸಸಂ/ಕೈಸ/3/124/21577/99-2000, ದಿನಾಂಕ: 19.02.2000 ರಂತೆ ನೋಂದಣಿ ಆಗಿರುತ್ತದೆ. ಇದರ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟವನ್ನು ಮೀರಿದ್ದಾಗಿರುತ್ತದೆ. ಉಲ್ಲೇಖ (1) ರನ್ವಯ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು, ಇವರ ವರದಿಯಂತೆ ಸಂಘವು ತನ್ನ ನೋಂದಾಯಿತ ಉದ್ದೇಶಗಳನ್ನು ಈಡೇರಿಸುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸದೇ ಕೇವಲ ಸಿಬ್ಬಂದಿ ಸಂಬಳ ಖರ್ಚು, ಸಭಾ ಖರ್ಚು ಇತರ ಖರ್ಚುಗಳಿಗೆ ಸಂಗ್ರಹಿಸಿದ ಷೇರಿನಲ್ಲಿ ವೆಚ್ಚ ಮಾಡುತಲಿದ್ದು, ಈ ಸಂಘವನ್ನು ಹೀಗೆ ಮುಂದುವರೆಸಿದಲ್ಲಿ ಸದಸ್ಯರಿಂದ ಸಂಗ್ರಹವಾದ ಷೇರು ಮೊತ್ತ ಶೂನ್ಯವಾಗುತ್ತದೆಂದು ತಿಳಿಸಿರುತ್ತಾರೆ.

ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆಗೊಳಿಸುವುದು ಸೂಕ್ತವೆಂದು ದಿನಾಂಕ: 16.05.2005 ರಂದು ಸಮಾಪನಗೊಳಿಸಲಾಗಿತ್ತು ಹಾಗೂ ಮಾರಾಟಾಧಿಕಾರಿ, 1ನೇ ವೃತ್ತ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ಉಲ್ಲೇಖ (4) ರಂತೆ ಸಮಾಪನಾಧಿಕಾರಿಗಳು ಪ್ರಭಾರ ವಹಿಸಿಕೊಂಡು ಲಭ್ಯವಿರುವ ಸಂಘದ ದಾಖಲಾತಿಗಳನ್ವಯ ಲೆಕ್ಕ ಪತ್ರಗಳನ್ನು ಪರಿಶೀಲಿಸಿದಾಗ ಜವಾಬ್ದಾರಿಯನ್ನು ವಿಲೇ ಮಾಡಲು ಆಸ್ತಿ ಭಾಗದಲ್ಲಿ ಯಾವುದೇ ಆಸ್ತಿ ಇರುವುದಿಲ್ಲ ಪೂರ್ಣ ನಷ್ಟವಿರುವುದರಿಂದ ಆಧ್ಯತ ಪಟ್ಟಿ ತಯಾರಿಸಿ ಅನುಮೋದನೆ ಪಡೆಯುವ ಪ್ರಶ್ನೆ ಉದ್ಭವಿಸುವುದಿಲ್ಲ ಎಂದು ತಿಳಿಸಿರುತ್ತಾರೆ. ಉಲ್ಲೇಖ (5) ರಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು, ಇವರು ಈ ಸಂಘದ ನೋಂದಣಿ ರದ್ದತಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಪರಿಗಣಿಸಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಮನಗಂಡು ಸದರಿ ಸಮಾಪನಾ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಆರ್‌ಸಿಎಸ್/ಎಲ್‌ಕ್ಯೂಡಿ/54/2004-05, ದಿನಾಂಕ: 4ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿ ಪ್ರತಿಪಾದಿಸಲಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು, ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ), ಕೇಂದ್ರ ಕಛೇರಿ, ಬೆಂಗಳೂರು, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರಡಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಶ್ರೀ ಎನ್. ಗೋವಿಂದೇಗೌಡ ಸ್ಮಾರಕ ಕೈಗಾರಿಕಾ ಸಹಕಾರ ಸಂಘ ನಿ., ಶಿವಮೊಗ್ಗ, ಇದರ ನೋಂದಣಿ ಸಂಖ್ಯೆ: ಕೈಸಸಂ/ಕೈಸ/3/124/21577/99/2000, ದಿನಾಂಕ: 19.02.2000ನ್ನು ರದ್ದುಪಡಿಸಿರುತ್ತೇನೆ. ಈ ನೋಂದಣಿ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘಗಳ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತು ಹೋಗಿರುತ್ತದೆಂದು ಸಂಘವು ಅಸ್ತಿತ್ವದಲ್ಲಿಲ್ಲದೆ ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು.

ಈ ಆದೇಶವು ನನ್ನ ಹಸ್ತಾಕ್ಷರ ಹಾಗೂ ಕಛೇರಿಯ ಮೊಹರ್‌ನೊಂದಿಗೆ ಈ ದಿನ ದಿನಾಂಕ: 04.03.2006 ರಂದು ಹೊರಡಿಸಲಾಗಿದೆ.

**ಬಿ. ನಾಗರಾಜ**

ಪಿ.ಆರ್. 586 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ).

**GOVERNMENT OF KARNATAKA**
**DIRECTORATE OF ECONOMICS & STATISTICS BANGALORE-1**
**Consumer Price Index Numbers for Industrial Workers**

**No. DES 23 PWX 2005** **Base: 1987-88=100** **Month: Dec 2005**
**State: Karnataka** **Date : 27-02-2006**

| | Group/Sub-Group | Bell-ary | Bha-dra-vathi | Da-van-gere | Dan-deli | Gul-ba-rga | Hari-har | Has-san | Man-dya | Man-ga-lore | My-sore | Rai-chur | Tum-kur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| **I.** | **FOOD:** | | | | | | | | | | | | |
| | (a) Cereals & Products | 354 | 402 | 373 | 327 | 344 | 356 | 350 | 361 | 271 | 380 | 331 | 360 |
| | (b) Pulses & Products | 334 | 353 | 342 | 405 | 296 | 332 | 360 | 359 | 368 | 372 | 302 | 325 |
| | (c) Oils & Fats | 243 | 244 | 254 | 252 | 264 | 242 | 257 | 258 | 227 | 267 | 259 | 258 |
| | (d) Meat, Fish & Eggs | 360 | 369 | 382 | 479 | 409 | 347 | 338 | 377 | 533 | 409 | 423 | 348 |
| | (e) Milk & Products | 334 | 262 | 322 | 323 | 306 | 267 | 251 | 342 | 289 | 257 | 307 | 281 |
| | (f) Condiments & Spices | 237 | 350 | 367 | 383 | 335 | 271 | 315 | 297 | 281 | 343 | 256 | 315 |
| | (g) Vegetables & Fruits | 275 | 331 | 396 | 390 | 320 | 302 | 353 | 446 | 332 | 407 | 290 | 510 |
| | (h) Other Food | 294 | 401 | 365 | 365 | 307 | 315 | 330 | 320 | 282 | 314 | 331 | 349 |
| | **FOOD GROUP INDEX** | **317** | **358** | **358** | **356** | **325** | **313** | **325** | **352** | **324** | **342** | **320** | **346** |
| **II.** | Pan, Supari, Tobacco & Intoxicants | 311 | 344 | 354 | 337 | 386 | 456 | 353 | 475 | 295 | 323 | 359 | 374 |
| **III.** | Fuel & Light | 320 | 321 | 314 | 457 | 293 | 326 | 354 | 333 | 275 | 341 | 481 | 289 |
| **IV.** | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| **V.** | Clothing, Bedding & Footwear | 255 | 253 | 227 | 373 | 277 | 266 | 340 | 382 | 242 | 296 | 432 | 214 |
| **VI.** | **MISCELLANEOUS:** | | | | | | | | | | | | |
| | (a) Medical Care | 590 | 511 | 372 | 291 | 288 | 268 | 348 | 324 | 361 | 298 | 394 | 216 |
| | (b) Education, Recreation & Amusement | 351 | 341 | 516 | 221 | 391 | 483 | 345 | 293 | 364 | 462 | 377 | 326 |
| | (c) Transport & Communication | 414 | 415 | 332 | 526 | 595 | 409 | 365 | 561 | 458 | 579 | 388 | 440 |
| | (d) Personal Care & effects | 259 | 273 | 257 | 274 | 337 | 259 | 311 | 290 | 265 | 319 | 269 | 273 |
| | (e) Others | 334 | 364 | 282 | 426 | 302 | 273 | 253 | 286 | 236 | 330 | 426 | 243 |
| | Miscellaneous Group | 373 | 350 | 334 | 327 | 357 | 325 | 320 | 306 | 324 | 400 | 364 | 285 |
| | **GENERAL INDEX** | **296** | **314** | **308** | **336** | **297** | **288** | **303** | **321** | **291** | **311** | **326** | **277** |
| | To convert to Base 1960 Multiply by Linking Factor. | **7.39** | **9.19** | **8.27** | **...** | **8.26** | **8.56** | **9.25** | **7.92** | **9.31** | **9.05** | **...** | **...** |

FOR DIRECTOR

**GOVERNMENT OF INDIA**
**MINISTRY OF LABOUR**
**LABOUR BUREAU**
**'Cleremount' Shimla-171004 Dated: 1st February 2006**
**CONSUMER PRICE INDEX NUMBERS FOR INDUSTRIAL WORKERS**

**State: Karnataka** **(Base: 1982=100)** **Month: December 2005**

| Code | | Centre | Bangalore | Belgaum | Hubli Dharwar | Mercara |
|---|---|---|---|---|---|---|
| 1000 | IA. | **FOOD:** | | | | |
| 1100 | | (a) Cereals & Products | 436 | 549 | 470 | 450 |
| 1200 | | (b) Pulses & Products | 633 | 572 | 588 | 612 |
| 1300 | | (c) Oils & Fats | 391 | 361 | 369 | 415 |
| 1400 | | (d) Meat, Fish & Eggs | 663 | 658 | 645 | 613 |
| 1500 | | (e) Milk & Products | 379 | 527 | 442 | 461 |

| Code | | Centre | Bangalore | Belgaum | Hubli Dharwar | Mercara |
|---|---|---|---|---|---|---|
| 1600 | | (f) Condiments & Spices | 561 | 648 | 638 | 500 |
| 1700 | | (g) Vegetables & Fruits | 586 | 525 | 630 | 528 |
| 1800 | | (h) Other Food | 799 | 830 | 744 | 763 |
| 1000 | | **FOOD GROUP** | 548 | 598 | 553 | 540 |
| 2000 | I. | Pan, Supari, Tobacco & Intoxicants | 663 | 613 | 603 | 533 |
| 3000 | II. | Fuel & Light | 1009 | 711 | 630 | 431 |
| 4000 | III. | Housing Index | 630 | 797 | 651 | 200 |
| 5000 | IV. | Clothing, Bedding & Footwear | 281 | 292 | 330 | 437 |
| 6000 | V. | **Miscellaneous:** | | | | |
| 6100 | | (a) Medical Care | 469 | 564 | 487 | 343 |
| 6200 | | (b) Education, Recreation & Amusement | 508 | 851 | 623 | 641 |
| 6300 | | (c) Transport & Communication | 810 | 522 | 780 | 699 |
| 6400 | | (d) Personal Care & effects | 491 | 485 | 502 | 471 |
| 6500 | | (e) Others | 532 | 594 | 476 | 482 |
| 6600 | | Miscellaneous Group | 560 | 585 | 545 | 515 |
| | | **GENERAL INDEX** | **555** | **608** | **561** | **500** |

**RAJESH THAKUR**

P.R. 587 JOINT DIRECTOR.

**ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ :** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಲಗ್ಗೆರೆ ಗ್ರಾಮದ ಸ.ನಂ.92 ರಲ್ಲಿ 0.22 ಗುಂಟೆ ಜಮೀನನ್ನು ಆಶ್ರಯ ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಿಸಿ ಅರ್ಹ ಫಲಾನುಭವಿಗಳಿಗೆ ಹಂಚಿಕೆ ಮಾಡುವ ಬಗ್ಗೆ ಬೆಂಗಳೂರು ಉತ್ತರ ತಾಲ್ಲೂಕು ಪಂಚಾಯಿತಿಗೆ ವರ್ಗಾಯಿಸುವ ಬಗ್ಗೆ.

**ಉಲ್ಲೇಖ :** 1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ:842 ಎಲ್.ಜಿ.ಬಿ. 2004, ದಿನಾಂಕ: 8.6.2005.

2) ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ:ಸಿ.ಆರ್:65/05-06, ದಿನಾಂಕ: 17.2.2006.

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಲಗ್ಗೆರೆ ಗ್ರಾಮದ ಸ.ನಂ.92 ರಲ್ಲಿ 2.01 ಎಕರೆ:ಗುಂಟೆ ಸರ್ಕಾರಿ ಹಲ್ಲುಬನ್ನಿ ಜಮೀನು ಆಗಿದ್ದು ಸದರಿ ಜಮೀನಿನಲ್ಲಿ ಅನಧಿಕೃತವಾಗಿ 25.30 ಮನೆಗಳು ನಿರ್ಮಾಣವಾಗಿದ್ದು ಅನಧಿಕೃತ ಮನೆಗಳನ್ನು ಒಂದೇ ಕಡೆ ಸ್ಥಳಾಂತರಿಸಿ ಆಶ್ರಯ ಯೋಜನೆಯಡಿಯಲ್ಲಿ ಅರ್ಹರಿಗೆ ನಿವೇಶನ ನಿರ್ಮಿಸಿ ಅನುಕೂಲ ಮಾಡಲು ಮತ್ತು ಉಳಿದ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಬಸ್‌ನಿಲ್ದಾಣಕ್ಕೆ ವರ್ಗಾಯಿಸಲು ಉಲ್ಲೇಖ (1)ರ ಸರ್ಕಾರದ ಪತ್ರದಲ್ಲಿ ನಿರ್ದೇಶನ ನೀಡಲಾಗಿರುತ್ತದೆ.

ಅದರಂತೆ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಉಲ್ಲೇಖ (2) ರಂತೆ ಲಭ್ಯವಿರುವ ಜಮೀನು ಬಗ್ಗೆ ನಕ್ಷೆ ತಯಾರಿಸಿ ವರದಿ ನೀಡಿದ್ದು ನಕ್ಷೆಯಂತೆ 0.22 ಗುಂಟೆ ವಿಸ್ತೀರ್ಣ ಆಶ್ರಯ ಯೋಜನೆಯಡಿ ನಿವೇಶನ ಹಂಚಲು ಮತ್ತು 0.23 ಗುಂಟೆ ರಸ್ತೆಗೆ ಹೋಗಿದ್ದು ಉಳಿದ 0.36 ಗುಂಟೆ ಪ್ರದೇಶವನ್ನು ಬಿ.ಎಂ.ಟಿ.ಗೆ ವರ್ಗಾವಣೆ ಮಾಡಬಹುದೆಂದು ತಿಳಿಸಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶ ಮತ್ತು ಉಲ್ಲೇಖ (2)ರ ತಹಶೀಲ್ದಾರ್ ವರದಿಯಂತೆ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಲಗ್ಗೆರೆ ಗ್ರಾಮದ ಸ.ನಂ.92 ರಲ್ಲಿ 0.22 ಗುಂಟೆ ಜಮೀನನ್ನು ಆಶ್ರಯ ನಿವೇಶನಗಳ ಹಂಚಿಕೆಗಾಗಿ ಆಯುಕ್ತರು, ದಾಸರಹಳ್ಳಿ ನಗರಸಭೆ, ಬೆಂಗಳೂರು ರವರಿಗೆ ವರ್ಗಾಯಿಸುವುದು ಸೂಕ್ತವೆಂದು ಭಾವಿಸಲಾಗಿದೆ. ಅಂತೆಯೇ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಲ್.ಎನ್.ಡಿ(ಎನ್)ಸಿ.ಆರ್:28/2003-04, ದಿನಾಂಕ: 22ನೇ ಫೆಬ್ರವರಿ 2006**

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಲಗ್ಗೆರೆ ಗ್ರಾಮದ ಸ.ನಂ.92 ರಲ್ಲಿ ಸರ್ಕಾರಿ ಹುಲ್ಲುಬನ್ನಿ ಎಂದು ವರ್ಗೀಕೃತಗೊಂಡಿರುವ 0.22 ಗುಂಟೆ ವಿಸ್ತೀರ್ಣದ ಜಮೀನನ್ನು ತಾಲ್ಲೂಕು ಮೋಜಣಿದಾರರು ತಯಾರಿಸಿರುವ ನಕ್ಷೆ ಹಾಗೂ ತಹಶೀಲ್ದಾರ್ ರವರ ಪ್ರಸ್ತಾವನೆಯನ್ನು ಪರಿಗಣಿಸಿ ಉಲ್ಲೇಖ (1)ರ ಸರ್ಕಾರದ ನಿರ್ದೇಶನ ರೀತ್ಯಾ ಆಶ್ರಯ ಯೋಜನೆಯಡಿ ಅರ್ಹ ಫಲಾನುಭವಿಗಳಿಗೆ ನಿವೇಶನ ಹಂಚಿಕೆ ಸಲುವಾಗಿ ಆಯುಕ್ತರು, ದಾಸರಹಳ್ಳಿ ನಗರಸಭೆ, ಬೆಂಗಳೂರು ರವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮ 1969ರ ನಿಯಮ 18ಎ(1) ಅಡಿಯಲ್ಲಿ ವರ್ಗಾಯಿಸಿ ಆದೇಶಿಸಿದೆ. ಆಶ್ರಯ ಯೋಜನೆಯಡಿ ನಿವೇಶನಗಳನ್ನು ಅರ್ಹ ಫಲಾನುಭವಿಗಳಿಗೆ ಹಂಚಿಕೆ ಮಾಡುವ ಸಲುವಾಗಿ ಕೆಳಕಂಡ ಚಕ್ಕುಬಂದಿಗೊಳಪಟ್ಟು ಜಮೀನನ್ನು ಷರತ್ತಿಗೊಳಪಡಿಸಿ ಸದರಿಯವರಿಗೆ ಹಸ್ತಾಂತರಿಸಲು ಆದೇಶಿಸಿದೆ.

ಹಸ್ತಾಂತರಿಸಲು ಉದ್ದೇಶಿಸಿರುವ ಲಗ್ಗೆರೆ ಸ.ನಂ.92ರ ಚಕ್ಕುಬಂದಿ

ಪೂರ್ವ : 92ರ ಉಳಿಕೆ

ಪಶ್ಚಿಮ : ಸರ್ಕಾರಿ ಜಾಗ

ಉತ್ತರ : ಹಳ್ಳ

ದಕ್ಷಿಣ : ರಸ್ತೆ

**ಷರತ್ತುಗಳು**

1) ಆಶ್ರಯ ಯೋಜನೆಯಡಿ ನಿವೇಶನಗಳನ್ನು ಅರ್ಹ ಫಲಾನುಭವಿಗಳಿಗೆ ಹಂಚಿಕೆ ಮಾಡಲು ಮಾತ್ರ ಈ ಜಮೀನನ್ನು ಉಪಯೋಗಿಸತಕ್ಕದ್ದು. ಹಾಗೂ ಎರಡು ವರ್ಷಗಳ ಒಳಗಾಗಿ ಉದ್ದೇಶಿತ ಯೋಜನೆಗೆ ಬಳಕೆ ಮಾಡತಕ್ಕದ್ದು.
2) ಉದ್ದೇಶಿತ ಯೋಜನೆಗೆ ಈ ಜಮೀನು ಬಳಕೆಯಾಗದಿದ್ದಲ್ಲಿ ಕೂಡಲೇ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
3) ಈ ಜಮೀನು ಅಥವಾ ಜಮೀನಿನ ಒಂದು ಭಾಗ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾದಲ್ಲಿ ಮರಳಿ ಪಡೆದುಕೊಳ್ಳಲು ಜಿಲ್ಲಾಧಿಕಾರಿಗಳು ಅಧಿಕಾರ ಹೊಂದಿರುತ್ತಾರೆ.
4) ತಾಲ್ಲೂಕು ಮೋಜಣಿದಾರರು ತಯಾರಿಸಿರುವ ಸ್ಕೆಚ್‌ನಂತೆಯೇ ಲಭ್ಯವಾಗುವ ಜಮೀನಿನಲ್ಲಿ ಮಾತ್ರ ನಿವೇಶನಗಳನ್ನು ಅರ್ಹ ಫಲಾನುಭವಿಗಳಿಗೆ ಹಂಚಿಕೆ ಮಾಡಬೇಕು ಹಾಗೂ ಈ ಜಮೀನನ್ನು ಸ್ವಾಧೀನಕ್ಕೆ ಕೊಡುವ ಮೊದಲು ಈ ಜಮೀನಿನ ಮೋಜಣಿ ಮಾಡಿಸಿ ಗಡಿಗಳನ್ನು ನಿರ್ಣಯಿಸಲು ಹಾಗೂ ಮೇರೆ ಗುರುತುಗಳನ್ನು ಹಾಕು ತಹಶೀಲ್ದಾರ್ ರವರಿಗೆ ಸೂಚಿಸಿದೆ.

ಪಿ.ಆರ್. 588 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2, ಚಿಕ್ಕಮಗಳೂರು**

**ಪ್ರಕರಣ ಸಂಖ್ಯೆ: ಕಾಪಕಾ:ಎಫ್ 01:2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಶ್ರೀಮತಿ ಇಂದ್ರಾಣಿ ಕೋಂ ಲೇಟ್ ಈಶ್ವರ್ ಮತ್ತು ಮಕ್ಕಳು
ಬೆಳಗೊಳ,
ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ

1) ಶ್ರೀ ಕೃಷ್ಣೇಗೌಡ,
ಕಾಫಿ ಬೆಳೆಗಾರರು, ಬಾಳಗದ್ದೆ, ಗೋಣಿಬೀಡು ಹೋಬಳಿ,
ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ ಅರ್ಜಿದಾರರ ಗಂಡ ಈಶ್ವರ್ ರವರು ಪ್ರತಿವಾದಿಯವರ ಕಾಫಿ ತೋಟದಲ್ಲಿ ಕೂಲಿ ಆಗಿ ಕೆಲಸ ಮಾಡುತ್ತಿದ್ದಾಗ ದಿನಾಂಕ: 21.04.2004 ರಂದು ಅಪಘಾತವಾಗಿ ಮೃತಪಟ್ಟಿರುತ್ತಾರೆಂದು, ಈ ಸಂಬಂಧವಾಗಿ ಮೃತನ ಅವಲಂಬಿತರು ಎಂದು ಈ ಮೇಲ್ಕಂಡ ಅರ್ಜಿದಾರರು ಪರಿಹಾರಕ್ಕಾಗಿ ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ಸಂಬಂಧ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತನ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಈ ಪ್ರಕಟಣೆಯು ರಾಜ್ಯ ಪತ್ರಿಕೆಯಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಆರ್.ಬಿ. ಬಾಗೇವಾಡಿ**

ಪಿ.ಆರ್. 592 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2,
ಚಿಕ್ಕಮಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2, ಚಿಕ್ಕಮಗಳೂರು**

**ಪ್ರಕರಣ ಸಂಖ್ಯೆ: ಕಾಪಕಾ:ಎಫ್ :**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಶ್ರೀಮತಿ ಗಂಗಮ್ಮ ಕೋಂ ಲೇಟ್ ಹನುಮಂತ ಶೆಟ್ಟಿ
ಸಿದ್ದರ ಗ್ರಾಮ ಮತ್ತು ಅಂಚೆ, ಕಡೂರು ತಾಲ್ಲೂಕು,
ಚಿಕ್ಕಮಗಳೂರು ಜಿಲ್ಲೆ.
2) ಕುಮಾರಿ ಶೃತಿ ತಂದೆ; ಲೇಟ್ ಹನುಮಂತಶೆಟ್ಟಿ.

1) ಶ್ರೀ ಎಂ.ವಿ. ಸುಬ್ಬಾರಾವ್,
ಮಾಲೀಕರು, ಮೊದಾಲ ಸಾಮಿಲ್, ಗವನಹಳ್ಳಿ ಗ್ರಾಮ,
ರಾಂಪುರ ಅಂಚೆ, ಚಿಕ್ಕಮಗಳೂರು ತಾ: ಮತ್ತು ಜಿಲ್ಲೆ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ ಅರ್ಜಿದಾರರ ಗಂಡ:ಮಗ 29.08.2005 ರವರು ಪ್ರತಿವಾದಿಯವರ ಸಾಮಿಲ್‌ನಲ್ಲಿ ಕೆಲಸ ಮಾಡುತ್ತಿದ್ದಾಗ ದಿನಾಂಕ: 29.08.2005 ರಂದು ಅಪಘಾತವಾಗಿ ಮೃತಪಟ್ಟಿರುತ್ತಾರೆಂದು, ಈ ಸಂಬಂಧವಾಗಿ ಮೃತನ ಅವಲಂಬಿತರು ಎಂದು ಈ ಮೇಲ್ಕಂಡ ಅರ್ಜಿದಾರರು ಪರಿಹಾರಕ್ಕಾಗಿ ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ಸಂಬಂಧ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತನ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಈ ಪ್ರಕಟಣೆಯು ರಾಜ್ಯ ಪತ್ರಿಕೆಯಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಆರ್.ಬಿ. ಬಾಗೇವಾಡಿ**

ಪಿ.ಆರ್. 593 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2,
ಚಿಕ್ಕಮಗಳೂರು.